ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೦೬ ೧೬
ಸಂಚಿಕೆ : ೧೬

(ಖಾಸಗಿ ಪ್ರಸಾರಕ್ಕಾಗಿ ಮಾತ್ರ)

ನವೆಂಬರ್ – ಡಿಸೆಂಬರ್ ೨೦೧೦

ಸಂಪಾದಕರು
ಎಸ್.ವಿ. ಶ್ರೀನಿವಾಸರಾ



**ಪರಿವಿಡಿ**



ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೪೭೭/೨೬೬೭೬೭೭೩
ಇಮೇಲ್: bmsritrust@gmail.com
ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥, ಮಂಡ್ಯ ಜಿಲ್ಲೆ

## ಹಾರ್ದಿಕ ಅಭಿನಂದನೆಗಳು ಹಾಗೂ ಹೃತ್ಪೂರ್ವಕ ಶುಭಾಶಯಗಳು



*ಹೊಸ ಅಧ್ಯಕ್ಷ ಪ್ರೊ. ಡಿ. ಲಿಂಗಯ್ಯ ಅವರಿಗೆ ಸ್ವಾಗತ ಸಮಾರಂಭ ತಾ॥ ೨೩-೧೦-೨೦೧೦*

೩-೧೦-೨೦೧೦ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತು ಮತ್ತು ಶ್ರೀ ಸರಸ್ವತಿ ಬುಕ್ಸ್ ಎನ್. ಕಾರ್ತಿಕೇಯನ್ ಪ್ರಕಾಶಕರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದೊಡನೆ ಡಾ. ವಿಜಯಾ ಸುಬ್ಬರಾಜ್ ಅವರ ಮೂರು ಕೃತಿಗಳ (ಮಕ್ಕಳ ಸಾಹಿತ್ಯ) ಲೋಕಾರ್ಪಣೆ ಕಾರ್ಯಕ್ರಮ ಹಮ್ಮಿಕೊಂಡಿದ್ದವು.



ಡಾ. ವಿಜಯಾ ಸುಬ್ಬರಾಜ್ ಅವರ ಕೃತಿಗಳ ಲೋಕಾರ್ಪಣೆ

# ಸಂಪಾದಕೀಯ

ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ನೀಡುವುದಾಗಿ ಕೇಂದ್ರ ಸರ್ಕಾರ ಘೋಷಿಸಿ ಆಗಲೇ ಎರಡು ವರ್ಷಗಳೇ ಕಳೆದಿದೆ. ಆದರೆ ಇದುವರೆಗೆ ಈ ಬಗ್ಗೆ ಖಚಿತ ಯೋಜನೆಯ ರೂಪುರೇಷೆಯಾಗಲಿ, ಅನುಷ್ಠಾನ ಮಾರ್ಗದರ್ಶನ ನೀಡುವ ವಿವರಗಳಾಗಲಿ ಕೇಂದ್ರ ಸರ್ಕಾರದಿಂದ ಬಂದಿರುವುದಿಲ್ಲ. ಕರ್ನಾಟಕ ಸರ್ಕಾರಕ್ಕೆ ಈ ಬಗ್ಗೆ ಹಣವೂ ಬಿಡುಗಡೆಗೊಂಡಿರುವುದಿಲ್ಲ. ಕೇಂದ್ರ ಸರ್ಕಾರದ ಈ ವಿಳಂಬ ನೀತಿಯ ಮರ್ಮ ಒಗಟಾಗಿ ಗೋಚರಿಸುತ್ತಿದೆ. ಕರ್ನಾಟಕ ಸರ್ಕಾರವು ಸಮೃದ್ಧ ಪ್ರಾಚೀನ ಕನ್ನಡಸಾಹಿತ್ಯದ ಪುನರುತ್ಥಾನಕ್ಕಾಗಿ ತಾನು ಕೈಗೊಳ್ಳಬೇಕಾದ ಹಾಗೂ ಇದುವರೆಗೆ ಕೈಗೊಂಡಿರುವ ಯೋಜನೆಗಳ ವಿವರಗಳನ್ನು ಕ್ರೋಡೀಕರಿಸಿ ಕೇಂದ್ರ ಸರ್ಕಾರಕ್ಕೆ ಇವುಗಳ ವಿವರವನ್ನು ನೀಡಲು ತಜ್ಞರ ಒಂದು ಸಮಿತಿಯನ್ನು ನೇಮಿಸಿ ಅವನ್ನು ಪರಿಶೀಲಿಸಿ, ಶೀಘ್ರದಲ್ಲಿ ಕೇಂದ್ರಕ್ಕೆ ಸಲ್ಲಿಸಿ, ಹಣ ಬಿಡುಗಡೆಗೆ ಒತ್ತಾಯಿಸುವುದು ತೀವ್ರ ಅಗತ್ಯವಾಗಿದೆ.

ಈ ಬಗ್ಗೆ ಕೇಂದ್ರ ಸರ್ಕಾರ ನೀಡುವ ಅನುದಾನದ ಲಾಭವನ್ನು ತಮಿಳುನಾಡು ಸರ್ಕಾರ ಮಾತ್ರ ಪೂರ್ಣ ರೂಪದಲ್ಲಿ ಉಪಯೋಗಿಸಿಕೊಳ್ಳುತ್ತಿದೆ. ತಮಿಳು ಭಾಷೆ ವಿಶ್ವವ್ಯಾಪಿ ಪಸರಿಸಲು ತ್ವರಿತಕ್ರಮ ಕೈಗೊಂಡಿರುತ್ತದೆ. ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಲಭಿಸಿರುವ ಹಿನ್ನೆಲೆಯಲ್ಲಿ ನಮ್ಮ ಪ್ರತಿಷ್ಠಾನ ಈ ದಿಸೆಯಲ್ಲಿ ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಂಡು ಪ್ರಥಮತಃ ಮೌಲಿಕ ಆಸ್ತಿಯಾದ ಹಳಗನ್ನಡ ಸಾಹಿತ್ಯವನ್ನು ಆಸಕ್ತ ವಿದ್ಯಾರ್ಥಿಗಳಿಗೆ, ಉಪನ್ಯಾಸಕರುಗಳಿಗೆ, ಕನ್ನಡಾಭಿಮಾನಿಗಳಿಗೆ ಶಾಸ್ತ್ರೀಯ ರೀತಿಯಲ್ಲಿ ಪರಿಚಯಿಸಲು ಹಳಗನ್ನಡ ತರಗತಿಗಳನ್ನು ಪ್ರಾರಂಭಿಸಿದೆ. ಇದಕ್ಕೆ ಅಪಾರ ಬೇಡಿಕೆ ಇರುವುದು ನಮಗೆ ಉತ್ಸಾಹ ತಂದಿದೆ.

ಸಮೃದ್ಧ ಪ್ರಾಚೀನ ಸಾಹಿತ್ಯ ಗಣಿಯಿಂದ ಅಮೂಲ್ಯ ವಜ್ರಸದೃಶ ಕೃತಿಗಳನ್ನು ಒಂದೊಂದಾಗಿ ಹೊರ ತೆಗೆದು ಪರಿಶೀಲಿಸಿ, ಸಂಸ್ಕರಿಸಿ, ಸಂಪಾದಿಸಿ ಪ್ರಕಟಿಸುವ ಹೊಣೆಗಾರಿಕೆ ತಜ್ಞ ವಿದ್ವಾಂಸರು, ಸಂಶೋಧಕರು, ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳಿಗೆ ಸೇರಿದುದಾಗಿದೆ. ಈ ದಿಸೆಯಲ್ಲಿ ನಮ್ಮ ಪ್ರತಿಷ್ಠಾನ ತನ್ನನ್ನು ಪೂರ್ಣ ರೀತಿಯಲ್ಲಿ ತೊಡಗಿಸಿಕೊಳ್ಳಲು ಸಿದ್ಧವಾಗಿದೆ. ಈ ಕೆಲಸ ವ್ಯವಸ್ಥಿತವಾಗಿ ರೂಪುಗೊಂಡು ಕಾರ್ಯಗತ ಗೊಳಿಸಲು ಪ್ರಬುದ್ಧ ಕನ್ನಡ, ಸಂಸ್ಕೃತಿ ಭಾಷಾತಜ್ಞರ ಸಲಹೆ, ಸಹಕಾರ ಸಹಯೋಗ ಅತ್ಯಗತ್ಯವಾಗಿ ಬೇಕಾಗಿದೆ. ಈ ಬಗ್ಗೆ ಅವರುಗಳು ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿದರೆ. ಅವುಗಳನ್ನು ಅಳವಡಿಸಿ ಕೊಂಡು ಹೆಚ್ಚು ಹೆಚ್ಚು ಕಾರ್ಯ ಯೋಜನೆಗಳನ್ನು ನಾವು ಹಮ್ಮಿಕೊಳ್ಳಲು ಸಹಾಯವಾಗುತ್ತದೆ ಎಂದು ವಿನಂತಿಸಿಕೊಳ್ಳಬಯಸುತ್ತೇವೆ.

■ ಎಸ್.ವಿ. ಶ್ರೀನಿವಾಸರಾವ್
ಸಂಪಾದಕರು



*ಕುಮಾರಿ ಸವಿತಾಗೆ ಬೀಳ್ಕೊಡಿಗೆ ಸಮಾರಂಭ*

# ಪ್ರತಿಷ್ಠಾನದ ವಾರ್ತೆ

**೩-೧೦-೨೦೧೦ ಭಾನುವಾರ ಬೆಳಿಗ್ಗೆ ೧೦-೩೦ ಗಂಟೆಗೆ ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತು ಮತ್ತು ಶ್ರೀ ಸರಸ್ವತಿ ಬುಕ್ಸ್ ಎನ್. ಕಾರ್ತಿಕೇಯನ್ ಪ್ರಕಾಶಕರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದೊಡನೆ ಡಾ. ವಿಜಯಾ ಸುಬ್ಬರಾಜ್ ಅವರ ಮೂರು ಕೃತಿಗಳ (ಮಕ್ಕಳ ಸಾಹಿತ್ಯ) ಲೋಕಾರ್ಪಣೆ ಕಾರ್ಯಕ್ರಮ** ಹಮ್ಮಿಕೊಂಡಿದ್ದವು. ಶ್ರೀ ಹರಿಹರಪ್ರಿಯ ಅಧ್ಯಕ್ಷತೆ ವಹಿಸಿದ್ದರು. ಹಿರಿಯ ಸಾಹಿತಿ ಡಾ. ನಿರುಪಮಾ 'ಪಂಚತಂತ್ರ' (ಇಂಗ್ಲಿಷ್), 'ಪಂಚತಂತ್ರ' (ಕನ್ನಡ), 'ಕಿಂದರಜೋಗಿ' ಕೃತಿಗಳನ್ನು ಲೋಕಾರ್ಪಣೆಗೊಳಿಸಿದರು. ಈ ಬಗ್ಗೆ ಡಾ. ನಿರುಪಮಾ ಪರವಾಗಿ ಅವರ ಮಗ ಶ್ರೀ ರವೀಂದ್ರನಾಥ್ ಅವರು ಗ್ರಂಥಗಳ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದರು. ಮುಖ್ಯ ಅತಿಥಿ ಶ್ರೀ ಹರಿಹರಪ್ರಿಯ ಈ ಗ್ರಂಥ ಗಳನ್ನು ಪ್ರಶಂಸಿಸಿ ಮಾತನಾಡಿದರು. ಪ್ರಕಾಶಕರಾದ ಲೇಖಾ ಕಾರ್ತಿಕೇಯನ್ ಸ್ವಾಗತಿಸಿದರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿದರು. ಕೊನೆಯಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ವಂದನೆ ಸಲ್ಲಿಸಿದರು.

**೫-೧೨-೨೦೧೦ರ ಕಾರ್ಯಕ್ರಮ**



**ಹಸ್ತಪ್ರತಿ ತರಗತಿಯ ಉದ್ಘಾಟನೆ - ಶ್ರೀಜಯರಾಮರಾಜೇ ಅರಸ್ ಅವರಿಂದ**

**೭-೧೨-೨೦೧೦ ಕನ್ನಡ ಶಾಸ್ತ್ರೀಯ ಭಾಷಾ ಯೋಜನೆಯಡಿ ಹಳಗನ್ನಡ ತರಗತಿ (೧೦ನೇ ತಂಡ), ಮತ್ತು ಹಸ್ತಪ್ರತಿ ತರಗತಿ (೨೧ನೇ ತಂಡ)ಯ ಉದ್ಘಾಟನೆ ಕಾರ್ಯಕ್ರಮ**

ಈ ವಿಶೇಷ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಬಿ. ಆರ್. ಜಯರಾಮರಾಜೇ ಅರಸ್, ಅಧ್ಯಕ್ಷರು ಸಾರ್ವಜನಿಕ ಜಮೀನುಗಳ ನಿಗಮದ ಅಧ್ಯಕ್ಷರು (ಮಾಜಿ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ) ದೀಪ ಬೆಳಗುವ ಮುಖೇನ ನೆರವೇರಿಸಿ ಹಿಂದಿನ ತಂಡದ ವಿದ್ಯಾರ್ಥಿಗಳಿಗೆ ಅರ್ಹತಾ ಪತ್ರ ವಿತರಿಸಿ ಕನ್ನಡದ ಪ್ರಾಚೀನತೆಯ ಮೇಲೆ ಬೆಳಕು ಚೆಲ್ಲಿದರು. ಹಳಗನ್ನಡದ ಹಿರಿಮೆ ಗರಿಮೆ ಮಾಸಿಹೋಗುತ್ತಿರುವ ಈ ದಿನಗಳಲ್ಲಿ ಇದರ ಪುನರುತ್ಥಾನ ಅತ್ಯವಶ್ಯಕವಾಗಿ ಆಗಬೇಕಾಗಿದೆ. ಇದನ್ನು ಮನಗಂಡಿರುವ ಎಂ.ವಿ.ಸೀ. ಸ್ಮಾರಕ ಪ್ರತಿಷ್ಠಾನ ನಿರಂತರ ಈ ಕೆಲಸದಲ್ಲಿ ಪ್ರವೃತ್ತವಾಗಿರುವುದು ಶ್ಲಾಘನೀಯ. ವಿದ್ಯಾರ್ಥಿಗಳು, ಉಪಾಧ್ಯಾಯರು, ಉಪನ್ಯಾಸಕರು ಹಾಗೂ ಕನ್ನಡಾಸಕ್ತರು ಇವರ ಉಪಯೋಗವನ್ನು ಪಡೆದು ಹಳಗನ್ನಡದ ಮಹತ್ವವನ್ನು ಎತ್ತಿಹಿಡಿಯುವುದು ಅತ್ಯಾವಶ್ಯಕವಾಗಿ ಆಗಬೇಕಾಗಿದೆ ಎಂದು ಹೇಳಿ, ಉತ್ತೀರ್ಣರಾದ ವಿದ್ಯಾರ್ಥಿಗಳನ್ನು ಅಭಿನಂದಿಸಿದರು.

ಪ್ರತಿಷ್ಠಾನದ ಗೌರವಾಧ್ಯಕ್ಷರಾದ ನಾಡೋಜ ಡಾ. ಜಿ. ನಾರಾಯಣ ಉಪಸ್ಥಿತರಿದ್ದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಸರ್ವರನ್ನು ಸ್ವಾಗತಿಸಿದರು ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರೂಪಿಸಿ, ಕೊನೆಯಲ್ಲಿ ವಂದನಾರ್ಪಣೆ ಮಾಡಿದರು.

**೧೧-೧೨-೨೦೧೦ ಶನಿವಾರ ಸಂಜೆ ಪ್ರೊ. ಕೆ. ವಿ. ರಾಘವಾಚಾರ್ ದತ್ತಿ ಹಾಗೂ 'ಸಿರಿ ಸಂಗೀತ' ಕಾರ್ಯ ಕ್ರಮಗಳು** ನಡೆದವು. ಈ ಸಂದರ್ಭದಲ್ಲಿ ಪ್ರೊ. ಕೆ. ವಿ. ರಾಘವಾಚಾರ್ ಅವರ ಗ್ರೀಕ್ ಸಾಹಿತ್ಯ ಕುರಿತು ಪ್ರೊ. ಕೆ.ಎಂ. ಸೀತಾರಾಮಯ್ಯ ಅವರಿಂದ ಉಪನ್ಯಾಸ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

ಗ್ರೀಕ್ ಸಾಹಿತ್ಯ ತಜ್ಞರಾದ ಪ್ರೊ. ಕೆ. ಎಂ. ಸೀತಾರಾಮಯ್ಯ ಅವರು ಪ್ರೊ. ಕೆ. ವಿ. ರಾಘವಾಚಾರ್ ಅವರ ಅಪ್ರತಿಮ ವಿದ್ವತ್ತನ್ನು ಸಭಿಕರಿಗೆ ಪರಿಚಯಿಸುತ್ತಾ ಗ್ರೀಕ್ ಸಾಹಿತ್ಯದ ಪ್ರಾಚೀನತೆ ಹಾಗೂ ಗ್ರೀಕ್ ರುದ್ರ ನಾಟಕಗಳ ಹುಟ್ಟು, ಬೆಳವಣಿಗೆ, ನಾಟಕ ಪ್ರದರ್ಶನ, ನಾಟಕ ಶಾಲೆ, ಅಲ್ಲಿನ ಪ್ರೇಕ್ಷಕಾಂಗಣದ ಬಗ್ಗೆ ವಿವರ ನೀಡಿ, ಪ್ರೊ. ಕೆ. ವಿ. ರಾಘವಾಚಾರ್ ಗ್ರೀಕ್ ಸಾಹಿತ್ಯದ ಬಗ್ಗೆ ವಿದ್ವತ್ತನ್ನು ಸಾಧಿಸಿ ಹೇಗೆ ಸಮರ್ಪಕವಾಗಿ ಆ ಮಹಾನ್ ಕಾವ್ಯಗಳನ್ನು ಅನುವಾದಿಸಿದ್ದಾರೆ ಎಂಬುದನ್ನು ಉಪನ್ಯಾಸದಲ್ಲಿ ವಿವರಿಸಿದರು. 'ಸಿರಿ ಸಂಗೀತ' ಕಾರ್ಯಕ್ರಮವನ್ನು ಸನ್ಮಾನ್ಯ ಶ್ರೀ ಹೊಸಳ್ಳಿ ವಾಸುದೇವ್, ಶ್ರೀಮತಿ ಎ. ರಂಗಮಣಿ, ಶ್ರೀ ಅಶ್ವತ್ಥ ನಾರಾಯಣ, ಶ್ರೀ ಸಿಸಿರ ಅವರು ನಡೆಸಿಕೊಟ್ಟರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ. ಡಿ. ಲಿಂಗಯ್ಯ ವಹಿಸಿದ್ದರು ಶ್ರೀಯುತರು. ತಮ್ಮ ಅಧ್ಯಕ್ಷ ಭಾಷಣದಲ್ಲಿ ಪ್ರೊ. ಕ. ವೆಂ. ರಾಘವಾಚಾರ್ ಅವರ ಜೀವನ-ಸಾಧನೆಯ ಮೇಲೆ ಬೆಳಕು ಚೆಲ್ಲಿದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರು ಪ್ರಾರ್ಥನೆ ಹಾಗೂ ನಾಡಗೀತೆಯನ್ನು ಹಾಡಿದರು. ಡಾ. ನಾ. ಗೀತಾಚಾರ್ಯ ಅವರು ವಂದಿಸಿದರು.

**೧೯-೧೨-೨೦೧೦** ಹೊಸಕೆರೆ ಚಿದಂಬರಯ್ಯ ಸಂಸ್ಮರಣ ಸಮಿತಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾಗೂ ಐ.ಬಿ.ಎಚ್. ಪ್ರಕಾಶನ ಇವುಗಳ ಸಂಯುಕ್ತ ಆಶ್ರಯದಲ್ಲಿ **ಕರ್ನಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯನವರ ೧೪೦ನೇ ಜಯಂತಿ ಕಾರ್ಯಕ್ರಮವನ್ನು ಏರ್ಪಡಿಸಿದ್ದರು.** ಅಂದೇ ಡಿ.ಎಲ್.ಎನ್. ಮತ್ತು ಸೋಸಲೆ ಅಯ್ಯಾಶಾಸ್ತ್ರಿ ದತ್ತಿ ಕಾರ್ಯಕ್ರಮ ಸಹ ನಡೆದವು.

ಐ.ಬಿ.ಹೆಚ್. ಪ್ರಕಾಶನ ಸಂಸ್ಥೆ ಮುದ್ರಿಸಿರುವ 'ಆರ್ಯ ಧರ್ಮಪ್ರದೀಪ' ಕೃತಿಯ ಬಿಡುಗಡೆಯನ್ನು ಖ್ಯಾತ ವಿಮರ್ಶಕ ಪ್ರೊ. ಎಲ್. ಎಸ್. ಶೇಷಗಿರಿರಾವ್ ನಡೆಸಿ ಕೃತಿಯ ಬಗ್ಗೆ ಮಾಹಿತಿ ನೀಡಿ, ಹೊಸಕೆರೆ ಚಿದಂಬರಯ್ಯ ಅವರ ವಿದ್ವತ್ತನ್ನು ಪ್ರಶಂಸಿದರು.

ಹೊಸಗನ್ನಡ ಸಾಹಿತ್ಯಕ್ಕೆ ಹೊಸಕೆರೆ ಚಿದಂಬರಯ್ಯನವರ 'ಗದ್ಯ ಕೃತಿಗಳು' ಬಗ್ಗೆ ಡಾ.ರಾ. ಲಕ್ಷ್ಮೀನಾರಾಯಣ, ಕೀರ್ತನ ಸಾಹಿತ್ಯ ಬಗ್ಗೆ ಡಾ. ನಾ. ಗೀತಾಚಾರ್ಯ, ನಾಟಕ ಸಾಹಿತ್ಯ ಕುರಿತು ಶ್ರೀ ಜಿ. ಎನ್. ನರಸಿಂಹಮೂರ್ತಿ ವಿವರಣಾತ್ಮಕ ವಿವರಣೆ ನೀಡಿದರು.

ಪ್ರೊ. ಡಿ. ಲಿಂಗಯ್ಯ ಅಧ್ಯಕ್ಷತೆ ವಹಿಸಿದ್ದರು. ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಜಿ. ಎನ್. ಲಕ್ಷ್ಮೀನಾರಾಯಣರಾವ್ ಅತಿಥಿಗಳ ಪರಿಚಯ ಮಾಡಿಸಿ ಎಲ್ಲರನ್ನೂ ಸ್ವಾಗತಿಸಿದರು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ವಂದನಾರ್ಪಣೆ ಮಾಡಿದರು.




**೫-೧೨-೨೦೧೦ 'ಮರೆಯಲಾರದ ನೆನಪು'** ಗ್ರಂಥ ಬಿಡುಗಡೆ. ಸಂಪಾದಕರು : ಶ್ರೀ ಎಂ. ಎಸ್. ಭಾಸ್ಕರ್. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ನೂತನ ಅಧ್ಯಕ್ಷರಾದ ಶ್ರೀ ಡಿ. ಲಿಂಗಯ್ಯ ಅವರ ಅಧ್ಯಕ್ಷತೆಯಲ್ಲಿ, ಶ್ರೀಮತಿ ವಿಜಯಾ ಸುಬ್ಬರಾಜ್ ಅವರು ಮುಖ್ಯ ಅತಿಥಿಗಳಾಗಿ ಬಂದಿದ್ದರು. ನಾಡೋಜ ಜಿ. ನಾರಾಯಣ (ಮಾಜಿ ಮೇಯರ್, ಗೌರವಾಧ್ಯಕ್ಷರು) ಅವರು ಪುಸ್ತಕವನ್ನು ಬಿಡುಗಡೆ ಮಾಡಿ ಪುಸ್ತಕದ ಬಗ್ಗೆ ಪ್ರಶಂಸಾತ್ಮಕ ಮಾತುಗಳನ್ನಾಡಿದರು. ಶ್ರೀಮತಿ ವಿಜಯ ಸುಬ್ಬರಾಜ್ ಅವರು ಪುಸ್ತಕದ ಪರಿಚಯ ಮಾಡಿಕೊಟ್ಟರು. ದಿವಂಗತ ಎಂ.ವಿ.ಸೀ., ಅವರ ಬಗ್ಗೆ ಸಂಪಾದಕರಾದ ಭಾಸ್ಕರ್ (ಎಂ.ವಿ.ಸೀ. ಅವರ ಹಿರಿಯ ಪುತ್ರ) ತಮ್ಮ ಹೊಸ ಪುಸ್ತಕದ ನೂತನ ನಿರೂಪಣೆಯನ್ನು ಸಭೆಯ ಗಮನಕ್ಕೆ ತಂದು ಬಂದಿದ್ದವರಿಗೆಲ್ಲಾ ವಂದನೆ ಅರ್ಪಿಸಿ, ಅವರ ತಂದೆಯವರ ಬಗ್ಗೆ ಕವನವೊಂದನ್ನು ವಾಚಿಸಿದರು. ಶ್ರೀ ಡಿ. ಲಿಂಗಯ್ಯ ಅವರು ಅಧ್ಯಕ್ಷ ಭಾಷಣದಲ್ಲಿ ಎಂ.ವಿ.ಸೀ. ಅವರ ಬಗ್ಗೆ ಮತ್ತು ಪುಸ್ತಕದಲ್ಲಿ ಬಂದಿರುವ ಎಂ.ವಿ.ಸೀ. ಅವರ ದಿನಚರಿ ಬಗ್ಗೆ ಶ್ಲಾಘನೆ ಮಾಡಿ ಇನ್ನಿತರ ಮಾಹಿತಿ ಗಳನ್ನು ಭಾಸ್ಕರ್ ಅವರು ಕಲೆಹಾಕಿ ವಿಸ್ತೃತವಾದ ಜೀವನ ಚರಿತ್ರೆ ಯೊಂದನ್ನು ರಚಿಸಲು ಸಹಾಯಮಾಡಬೇಕೆಂದು ಮನವಿ ಮಾಡಿದರು. ಕಾರ್ಯಕ್ರಮದ ಆರಂಭದಲ್ಲಿ ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ ಅವರು ನಾಡಗೀತೆಯನ್ನು ಸುಶ್ರಾವ್ಯವಾಗಿ ಹಾಡಿದರು. ಕಾರ್ಯಕ್ರಮಕ್ಕೆ ಬಂದವರಿಗೆಲ್ಲಾ ಪ್ರತಿಷ್ಠಾನದ ಖಜಾಂಚಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ಅವರು ವಂದನಾರ್ಪಣೆ ಮಾಡಿದರು. ಕಾರ್ಯಕ್ರಮದಲ್ಲಿ ಶ್ರೀನಿವಾಸರಾವ್ (ಪ್ರಸಿದ್ಧ ಸಾಹಿತಿಗಳು) ಮತ್ತು ಎಂ.ವಿ.ಸಿ ಅವರ ಬಂಧುಗಳು ಹಾಗೂ ಸಾಹಿತ್ಯಾಭಿಮಾನಿಗಳು ಭಾಗವಹಿಸಿದ್ದರು.

# ಗ್ರಂಥ ಪರಿಚಯ

**ಕಿಂದರಜೋಗಿ–ಪುಣ್ಯಕೋಟಿ–ಕಾಗೆ ಕಲಿತ ಪಾಠ**

*ಲೇಖಕಿ : ಡಾ. ವಿಜಯಾ ಸುಬ್ಬರಾಜು*

*ಪ್ರಕಾಶಕರು :* **ಅರವಿಂದ್ ಬುಕ್ ಸೆಂಟರ್**, ಬೆಂಗಳೂರು–೧೧.

**ಬೆಲೆ : ೩೫/– ಪುಟಗಳು : ೮೮**



ಲೇಖಕಿಯರು ಮೇಲ್ಕಂಡ ಜನಪ್ರಿಯ ವಿಷಯಗಳನ್ನೇ ಆಯ್ದುಕೊಂಡು ಮಕ್ಕಳಿಗೆ ಪ್ರಿಯವಾಗುವ ಧಾಟಿಯಲ್ಲಿ ನಾಟಕಗಳನ್ನು ರಚಿಸಿದ್ದಾರೆ. ಈ ನಾಟಕಗಳ ವೈಶಿಷ್ಟ್ಯವೆಂದರೆ ಸುಂದರ ಸಂಭಾಷಣೆ ಹಾಗೂ ಕಾವ್ಯಾನಂದವನ್ನೀಯುವ ಕವನಗಳು. 'ಕಿಂದರಜೋಗಿ' ಹಾಗೂ 'ಪುಣ್ಯಕೋಟಿ' ಹಳೆಯ ಜನಪದ ಕಥಾನಕಗಳಾಗಿದ್ದರೆ, 'ಕಾಗೆ ಕಲಿತ ಪಾಠ' ಒಂದು ಸ್ವತಂತ್ರ ನಾಟಕವಾಗಿದೆ. ಈ ನಾಟಕಗಳು ಮಕ್ಕಳು ಆಡಲು ಬಹಳ ಸೂಕ್ತವಾಗಿವೆ. ನಾಟಕದ ನಿರೂಪಣೆ, ಭಾಷೆ, ಬಹಳ ಸರಳವಾಗಿದ್ದು ಮಕ್ಕಳಿಗಲ್ಲದೆ ಎಲ್ಲರಿಗೂ ಹಿತವೆನಿಸುವುದರಲ್ಲಿ ಸಂದೇಹವಿಲ್ಲ. ಮೇಲ್ಕಂಡ ಕೃತಿಗಳು ಸಂಗ್ರಹ ಯೋಗ್ಯವಾಗಿವೆ.




**ಸಂಪ್ರೀತಿ**

**ಡಾ. ಆರ್. ಲಕ್ಷ್ಮೀನಾರಾಯಣ ಅಭಿನಂದನಾ ಗ್ರಂಥ**

*ಪ್ರಧಾನ ಸಂಪಾದಕರು : ಡಾ. ಎಲ್. ಆರ್. ಲಲಿತಾಂಬ*

ಪ್ರಕಾಶಕರು : **ಪರಸ್ಪರ ಪ್ರಕಾಶನ**, ಚಿಕ್ಕನಹಳ್ಳಿ ಸೂಲಿಕೆರೆ, ಅಂಚೆ, ಬೆಂಗಳೂರು–೬೦.

**ಪುಟಗಳು : ೪೧೦, ಬೆಲೆ : ೨೮೦/–**

ಡಾ. ಲಕ್ಷ್ಮೀನಾರಾಯಣ ಅವರು ಖ್ಯಾತ ವಿದ್ವಾಂಸರು. ವಿಜಯನಗರ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದು ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನ ಉಪನ್ಯಾಸಕರಾಗಿದ್ದ ಶ್ರೀಯುತರು ಕನ್ನಡ, ಸಂಸ್ಕೃತ, ಹಿಂದಿ, ಇಂಗ್ಲಿಷ್ ಭಾಷಾ ಸಾಹಿತ್ಯಗಳನ್ನು ಗಾಢವಾಗಿ ಅಭ್ಯಸಿಸಿ ಅವುಗಳ ಮೇಲೆ ಪ್ರಭುತ್ವ ಸಾಧಿಸಿಕೊಂಡಿದ್ದಾರೆ. ಇವರೆಲ್ಲ ಗ್ರಂಥಗಳಲ್ಲಿ ವಿದ್ವತ್ ಪ್ರತಿಮಿಸುತ್ತಿರುವುದನ್ನು ಕಾಣಬಹುದಾಗಿದೆ. 'ವಕ್ರೋಕ್ತಿ ಜೀವಿತ–ಒಂದು ಅಧ್ಯಯನ' ಎಂಬ ಮಹಾಪ್ರಬಂಧ ರಚಿಸಿ ಡಾಕ್ಟರೇಟ್ ಪಡೆದಿದ್ದಾರೆ. ಕನ್ನಡ ವಕ್ರೋಕ್ತಿ ಜೀವಿತ ಕೃತಿಗೆ ೨೦೦೪ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿಗಳಿಗೆ ಇವರು ಭಾಜನರಾಗಿದ್ದಾರೆ. ಅನುರೂಪ ಕೃತಿಗೆ ಸಾಹಿತ್ಯ ಸೇತು ಪ್ರಶಸ್ತಿ ಲಭಿಸಿದೆ. ಶ್ರೀಯುತರ ಶಿಷ್ಯರು, ಹಿತೈಷಿಗಳು, ಅಭಿಮಾನಿಗಳು ಗೌರವಪೂರ್ವಕವಾಗಿ ಈ ವಿಶಿಷ್ಟ ಕೃತಿಯನ್ನು 'ಅಭಿನಂದನ ಗ್ರಂಥ'ವಾಗಿ ಅರ್ಪಿಸಿದ್ದಾರೆ. ಇದರಲ್ಲಿ ಕನ್ನಡನಾಡಿನ ಬಹಳಷ್ಟು ಪ್ರಮುಖ ಲೇಖಕರು ತಮ್ಮ ಪ್ರೀತಿ, ವಿಶ್ವಾಸ, ಗೌರವವನ್ನು ತಮ್ಮ ಲೇಖನಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಈ ಕೃತಿಯಲ್ಲಿನ ಲೇಖನಗಳು ನಾಲ್ಕು ವಿಭಾಗಗಳಲ್ಲಿ, 'ನೆನಪಿಗೆ ಮೀಟುಗೋಲು', 'ಅವಲೋಕನ', 'ಸಮಾಹಿತ', 'ವರ್ತಮಾನ ಭವಿಷ್ಯ'ಗಳಲ್ಲಿ, ಸಂಕಲಿಸಲಾಗಿವೆ. ಹೆಜ್ಜೆ ಗುರುತು ವಿಭಾಗದಲ್ಲಿ ಇವರ ಜೀವನ–ಸಾಹಿತ್ಯದ ಮಜಲುಗಳನ್ನು ಗುರುತಿಸಲಾಗಿದೆ. ಇದೊಂದು ಅಪೂರ್ವ ಮಾಹಿತಿ ಗ್ರಂಥವಾಗಿದ್ದು ಎಲ್ಲರ ಗ್ರಂಥಾಲಯದಲ್ಲೂ ಇರಲೇಬೇಕಾದ ಕೃತಿಯಾಗಿದೆ.




**ಪಂಚತಂತ್ರ**' (ನಾಟಕರೂಪಾಂತರ),

*ಲೇಖಕರು : ಡಾ. ವಿಜಯಾ ಸುಬ್ಬರಾಜು*

*ಪ್ರಕಾಶಕರು :* **ಅರವಿಂದ್ ಬುಕ್ ಸೆಂಟರ್**, ೩೪೨, ಚಿತ್ರಮೂಲ ಅಪಾರ್ಟ್‌ಮೆಂಟ್ಸ್, ಬೈರಸಂದ್ರ, ಜಯನಗರ ೧ನೇ ಬ್ಲಾಕ್, ಈಸ್ಟ್, ಬೆಂಗಳೂರು–೫೬೦ ೦೧೧.

**ಬೆಲೆ ರೂ. ೪೫/– ಪುಟಗಳು : ೧೧೬**




ವಿದ್ವಾಂಸ ವಿಷ್ಣುಶರ್ಮರ 'ಪಂಚತಂತ್ರ'ದಲ್ಲಿನ ಕಥೆಗಳು ಲೋಕ ಪ್ರಸಿದ್ಧವಾಗಿವೆ. ಇವು ಪ್ರಪಂಚದ ಎಲ್ಲಾ ಭಾಷೆಗಳಿಗೂ ಅನುವಾದಗೊಂಡಿವೆ. 'ಪಂಚತಂತ್ರ'ದ ಜನಪ್ರಿಯ ಕಥೆಗಳನ್ನು ನಾಟಕ ಪ್ರಕಾರಕ್ಕೆ ಅಳವಡಿಸಿರುವುದು ಈ ಕೃತಿಯ ವೈಶಿಷ್ಟ್ಯ. ಖ್ಯಾತ ಲೇಖಕಿ ಹಾಗೂ ನಿವೃತ್ತ ಪ್ರಾಧ್ಯಾಪಕಿಯಾಗಿರುವ ಶ್ರೀಮತಿ (ಡಾ) ವಿಜಯಾ ಸುಬ್ಬರಾವ್ ಅವರು ಬಹಳ ಶ್ರಮವಹಿಸಿ ಕಥೆಯನ್ನು ದೃಶ್ಯಮಾಧ್ಯಮಕ್ಕೆ ಹೊಂದುವಂತೆ ಪರಿವರ್ತಿಸಿರುವುದು ಸ್ತುತ್ಯಾರ್ಹ ಕಾರ್ಯವಾಗಿದೆ. ಮಕ್ಕಳಿಗೆ ಪ್ರಿಯವೆನಿಸುವಂತೆ ಲಲಿತ ಭಾಷೆಯಲ್ಲಿ ಸಣ್ಣ ಸಣ್ಣ ಮಾತುಗಳಲ್ಲಿ ಬಹಳ ರಂಜನೀಯವಾಗಿ ಕೃತಿಯನ್ನು ರಚಿಸಿ ಮಕ್ಕಳಿಗೆ ಅಲ್ಲದೆ ಹಿರಿಯರ ಪ್ರೀತ್ಯಾದರಕ್ಕೂ ಪಾತ್ರರಾಗಿದ್ದಾರೆ.




## ಬೇಂದ್ರೆ ಕಾವ್ಯದಲ್ಲಿ ಮಾತೃತ್ವದ ಸ್ವರೂಪ : ಒಂದು ಅಧ್ಯಯನ

ಲೇಖಕರು : ಎಲ್. ರೂಪ ಪ್ರಿಯದರ್ಶಿನಿ. ಪ್ರಕಾಶಕರು : ದಿನಕರ ಪ್ರಕಾಶನ, ೬೯೦, ೭ನೇ ಬ್ಲಾಕ್, ೨ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೮೫. ಪ್ರಥಮ ಮುದ್ರಣ: ೨೦೦೯, ಪುಟಗಳು : ೧೦೮, ಬೆಲೆ : ರೂ. ೫೦/-

ಡಾ. ದ. ರಾ. ಬೇಂದ್ರೆ ಕನ್ನಡ ಸಾಹಿತ್ಯದ ಖ್ಯಾತ ಕವಿ. ಸೃಜನಾತ್ಮಕ ಪ್ರತಿಭೆಯ ಸಾಕಾರರೂಪ. ಅವರ ಬಹಳಷ್ಟು ಕವನಗಳಲ್ಲಿ ಮಾತೃತ್ವಕ್ಕೆ ಪ್ರಾಮುಖ್ಯ ಸ್ಥಾನ ನೀಡಿರುತ್ತಾರೆ. ತಮ್ಮ ಕವಿತೆಗಳಲ್ಲಿ ಅವರು ತಾಯಿಯನ್ನು ವಿವಿಧ ಸ್ವರೂಪಗಳಲ್ಲಿ ಕಂಡಿದ್ದಾರೆ. ಕಂಡಿದ್ದನ್ನು ಕವಿತೆಗಳಲ್ಲಿ ಕಂಡರಿಸಿದ್ದಾರೆ. ಅವರು ನೀಡುವ ಕಾವ್ಯಾನುಭವ ಅನನ್ಯವಾದದ್ದು, ರಸಭರಿತವಾದದ್ದು, ಹಾಗೆ ಆದರಣೀಯವಾದದ್ದು. ಲೇಖಕಿ ಎಲ್. ರೂಪಪ್ರಿಯದರ್ಶಿನಿಯವರು ಬಹಳ ಶ್ರಮವಹಿಸಿ ವರಕವಿ ದ. ರಾ. ಬೇಂದ್ರೆಯವರ ಕವನಗಳಲ್ಲಿನ ಮಾತೃತ್ವದ ಸ್ವರೂಪವನ್ನು ಅಧ್ಯಯನಕ್ಕೆ ಒಳಪಡಿಸಿ ಅವನ್ನು ಮಥಿಸಿ ಬೆಣ್ಣೆಯಂತಹ ಭಾವವನ್ನು ಹೊರತೆಗೆದು ಕಾವ್ಯಾಭಿಮಾನಿಗಳಿಗೆ ಉಣಬಡಿಸಿದ್ದಾರೆ. ಬೇಂದ್ರೆಯವರ ಸಮಸ್ತ ಕಾವ್ಯ ಮೂಲವಾದ ಅಖಂಡ ಆನಂದಾನುಭವ ಮಾತೃ ಪ್ರತೀಕವೇ ಮಾಧ್ಯಮವಾಗಿರುವುದನ್ನು ಪ್ರತಿಪಾದಿಸಿರುತ್ತಾರೆ. ಈ ಅಧ್ಯಯನದ ಆರು ಅಧ್ಯಾಯಗಳಲ್ಲಿ ಇದು ಪಡಿಮೂಡಿದೆ. ಇದೊಂದು ಮೌಲಿಕ ಅಧ್ಯಯನವಾಗಿದ್ದು ಎಲ್ಲರೂ ಸಂಗ್ರಹಿಸಿಟ್ಟುಕೊಂಡು ಆನಂದಿಸುವ ಕೃತಿಯಾಗಿದೆ.

## ಮರೆಯಲಾರದ ನೆನಪು




ಸಂಪಾದಕರು : ಎಂ. ಎಸ್. ಭಾಸ್ಕರ್. ಪ್ರಕಾಶಕರು : ಲಿಪಿ ಪ್ರಕಾಶನ, ೧ ಬ್ಯೂಗಲ್‌ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು-೪. ಪ್ರಥಮ ಮುದ್ರಣ ೨೦೧೦. ಪುಟಗಳು : ೭೨. ಬೆಲೆ : ರೂ. ೬೦/-

ಪ್ರೊ. ಎಂ. ವಿ. ಸೀತಾರಾಮಯ್ಯನವರ ಪುತ್ರ ಶ್ರೀ ಭಾಸ್ಕರ್‌ರವರು ರಚಿಸಿರುವ ೩ನೇ ಪುಸ್ತಕ. ತಂದೆಯ ಮರಣಾನಂತರ ಇವರಲ್ಲಿ ತಂದೆಯ ಮೇಲಿದ್ದ ಭಕ್ತಿ, ಪ್ರೀತಿ, ಅಭಿಮಾನ, ಗೌರವ. ಒಮ್ಮೆಗೆ ಕಾರಂಜಿಯಾಗಿ ಕವನ, ಲೇಖನ ರೂಪತಳೆದು ಹರಿದಿದೆ. ಶ್ರೀ ಭಾಸ್ಕರ್ ಅವರಿಗೆ ತಂದೆಯ ಬಹುತೇಕ ಒಡನಾಡಿಗಳ ಸಂಪರ್ಕ ಇದ್ದು, ಅವರು ಅವರ ತಂದೆಯ ಮೇಲೆ ಇದ್ದ ಅಪಾರ ಪ್ರೀತಿ, ಗೌರವಗಳನ್ನು ಕಣ್ಣಾರೆ ಕಂಡು ಆನಂದಿಸಿರುವುದನ್ನು ನೆನಪಿನ ಅಂಗಳದಲ್ಲಿ ಬಿತ್ತರಿಸಿದ್ದಾರೆ. ಇದೊಂದು ಅಪರೂಪ ಮಾದರಿಯ ಸಂಕೀರ್ಣ ಪ್ರಕಾರದ ಕೃತಿ. ಚೆನ್ನಾಗಿ ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿದೆ. ಇವರ ಅನುಭವದ ಮೂಸೆಯಿಂದ ಇನ್ನೂ ಉತ್ತಮ ಕೃತಿಗಳು ಹೊರಬರಲಿ ಎಂದು ಆಶಿಸೋಣ.

## ಸಾದರ ಸ್ವೀಕಾರ

೧. **ಯಾಜುಷ-ಶ್ರಾದ್ಧ-ಮಂತ್ರ** : ಗ್ರಂಥಕರ್ತರು ಶ್ರೀ ರಾಮ ತತ್ವಪರಾಯಣ ವೆ॥ ಬ್ರಂ॥ ಶ್ರೀ ಬಿ. ಎಸ್. ಕಪನೀಪತಯ್ಯ. ಪ್ರಕಾಶಕರು : ಬಿ. ಕೆ. ಶ್ರೀಕಂಠಯ್ಯ, ೫೬೩/೧, ೨ನೇ ರಾಮಚಂದ್ರ ಅಗ್ರಹಾರ, ಖಿಲ್ಲೇ ಮೊಹಲ್ಲಾ, ಮೈಸೂರು-೪. ೫ನೇ ಮುದ್ರಣ ೨೦೧೦, ಬೆಲೆ : ರೂ. ೧೫೦/-. ಪುಟಗಳು : ೨೧೫.

೨. **ಸುಜ್ಞಾನ ಪ್ರಸಾರ ಸುಮಾವಳಿ ಸೌರಭ ಗ್ರಂಥಮಾಲ,** ಸಂಪುಟಗಳು : ೧, ೨, ೩. ಕೃತಿ ಕರ್ತೆ : ಹ॥ ಕುಂ॥ ಸೌ॥ ಶ್ರೀಮತಿ ಕೋಲಾರ್ ಪದ್ಮಾಬಾಯಿ ರಾಮರಾವ್. ಪ್ರಕಾಶಕರು: ಶ್ರೀ ಕೋಲಾರ್ ಜಗನ್ನಾಥರಾವ್ ಮತ್ತು ಸಹೋದರರು, ಬೆಂಗಳೂರು.

೩. **ಎರಡನೆ ಅಚಲಾನಂದ ದಾಸರ ಕೃತಿಗಳು:** ಲೇ॥ ವಿ. ಆರ್. ವಿಠ್ಠಲ್, ಪ್ರಕಾಶಕರು : ಶ್ರೀಮದ್ ಅಚಲಾನಂದ ಸೇವಾ ಸಮಿತಿ, ನಂ. ೬೦೦, ೮ನೇ ಮೇನ್, ೧೩ನೇ ಕ್ರಾಸ್, ತೊಣಚಿಕೊಪ್ಪಲ್ ಲೇಔಟ್, ಮೈಸೂರು-೯ ಮುದ್ರಣ : ೨೦೦೯ ಬೆಲೆ : ರೂ. ೫೦/-. ಪುಟಗಳು : ೬೬.

೪. **'ಕಗ್ಗೋಕ್ತಿ ಸಂಪದ'** : ಲೇಖಕರು : ಕುಲ್ಯಾಡಿ ಮಾಧವ ಪೈ. (ಭಾಗಗಳು ೫). ಪ್ರಕಾಶಕರು-ಲೇಖಕರು : ಕಮಲಾ ಟವರ್ಸ್ ಹಿಂದುಗಡೆ, ಉರ್ವ ಮಾರಿಗುಡಿ ಬಳಿ, ಗಾಂಧಿನಗರ, ಮಂಗಳೂರು-೬. ಪ್ರತಿಯೊಂದರ ಬೆಲೆ : ರೂ. ೧೨೫/-. ಪ್ರಕಟಣೆ : ೨೦೦೭, ೨೦೦೮, ೨೦೦೯.

೫. **೨೪ ಮಂಡಿಗೆಗಳು, ನೆಲೆ ತಪ್ಪಿದಾಗ (ಕಾದಂಬರಿ), ಮುಳಗಿ ತೇಲಾಡಿದನು.** (ಕೀರ್ತನೆಗಳ ಸಂಕಲನ). ಲೇಖಕರು : ಶ್ರೀಮತಿ ರತ್ನಾಮೂರ್ತಿ. ಪ್ರಕಾಶಕರು : ಅಕ್ಷರ ಪ್ರಕಾಶನ, ೨೨೯, ೨ನೇ ಕ್ರಾಸ್, ಹನುಮಂತನಗರ, ಬೆಂಗಳೂರು-೧೯. ಪ್ರಕಟಣೆ : ೨೦೦೯. ಬೆಲೆ : ರೂ. ೬೦/-, ರೂ. ೧೪೦/- ರೂ. ೧೧೦/-

**'ಗಡಿಯನೊದ್ದು'** ಕಥಾ ಸಂಕಲನ. ಲೇಖಕಿ : ರತ್ನಾಮೂರ್ತಿ. ಪ್ರಕಾಶಕರು : ಅಜಿಯಾ ಎಂಟರ್‌ಪ್ರೈಸಸ್. ೯೦, ಸಿ. ಬಸಪ್ಪ ಬಡಾವಣೆ, ಪಟ್ಟಣಗೆರೆ ರಾಜರಾಜೇಶ್ವರಿ ನಗರ ಬೆಂಗಳೂರು. ಪ್ರಕಟಣೆ : ೨೦೦೯, ಬೆಲೆ : ರೂ ೮೦/-. ಪುಟಗಳು : ೧೫೦.



# ಅಭಿನಂದನೆಗಳು

ಇತ್ತೀಚೆಗೆ ಮದ್ದೂರಿನಲ್ಲಿ 'ಬಿ.ಎಂ.ಶ್ರೀಕಂಠಯ್ಯ ಜೀವನ-ಸಾಧನೆ' ಕೃತಿ ಬಿಡುಗಡೆಗೊಂಡಿತು

೧. **ಕೇಶವ ಪ್ರಶಸ್ತಿ** : ರಾಷ್ಟ್ರಕವಿ ಎಂ. ಗೋವಿಂದ ಪೈ ಸಂಶೋಧನಾ ಕೇಂದ್ರವು ಪ್ರೊ. ತಾಳ್ತಜೆ. ಕೇಶವಭಟ್ಟರ ನೆನಪಿನಲ್ಲಿ ನೀಡಲಿರುವ ಮೇಲ್ಕಂಡ ಪ್ರಶಸ್ತಿಯನ್ನು **ನಿಘಂಟು ತಜ್ಞ ಪ್ರೊ. ನಾಡೋಜ ಜಿ. ವೆಂಕಟಸುಬ್ಬಯ್ಯ** ಅವರಿಗೆ ನೀಡಲಾಗಿದೆ. (೨೪-೧೦-೧೦)

೨. **ನೃಪತುಂಗ ಸಾಹಿತ್ಯ ಪ್ರಶಸ್ತಿ (೨೦೧೦)** : ಬೆಂಗಳೂರು ನಗರ ಸಾರಿಗೆ ಸಂಸ್ಥೆ, ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ನೀಡುತ್ತಿರುವ ೨೦೧೦ನೇ ಸಾಲಿನ ಪ್ರತಿಷ್ಠಿತ ಪ್ರಶಸ್ತಿಯನ್ನು ರವೀಂದ್ರ ಕಲಾಕ್ಷೇತ್ರದಲ್ಲಿ ದಿನಾಂಕ ೯-೧೧-೧೦ ರಂದು **ಡಾ. ಸಿ. ಪಿ. ಕೃಷ್ಣಕುಮಾರ್** ಅವರಿಗೆ ನೀಡಲಾಯಿತು. ಈ ಪ್ರಶಸ್ತಿಗೆ ಸಹಭಾಗಿಗಳಾದ ಪ್ರೊ. ದೇವನೂರು ಮಹದೇವ ಅವರು ಅನುಪಸ್ಥಿತರಾಗಿದ್ದರು. (ರೂ. ೫ ಲಕ್ಷ ಒಂದು ರೂಪಾಯಿಯನ್ನು ಈ ಇಬ್ಬರಿಗೂ ಸಮನಾಗಿ ಹಂಚಲಾಗುವುದೆಂದು ಪ್ರಕಟಣೆ ತಿಳಿಸುತ್ತದೆ).

೩. **ಮುದ್ದಣ ಪ್ರಶಸ್ತಿ (೨೦೧೦)** : ಪಟೇಲ್ ಮುನರೂರು ವಾಸುದೇವರಾವ್ ಸ್ಮಾರಕ ಟ್ರಸ್ಟಿನ ಮುದ್ದಣ ಕಾವ್ಯ ಪ್ರಶಸ್ತಿಗೆ ಸುಳ್ಯದ ಜಿ. ಎಸ್. ಉಬರಡ್ಕ ಅವರ 'ಭೂಮಿ ತೂಗುವ ಹಕ್ಕಿ', ಶ್ರೀ ಸುಬ್ಬು ಹೊಲೆಯಾರರವರ 'ಎಲ್ಲರ ಬೆರಳಲ್ಲೂ ಅಂಟಿಕೊಂಡಿರುವ ಮುಖವೇ' ಕೃತಿಗಳು ಆಯ್ಕೆಗೊಂಡಿವೆ. (ಪ್ರಕಟಣೆ : ೨೬-೧೦-೧೦).

೪. **ಶ್ರೀ ಶಿವರಾತ್ರೀಶ್ವರ ಪ್ರಶಸ್ತಿ (೨೦೦೯)** : ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯಿಂದ ನೀಡುವ ಈ ಪ್ರಶಸ್ತಿ ಧಾರವಾಡದ ಬಸವಾನಂದ ಸ್ವಾಮೀಜಿ ರಚಿಸಿರುವ 'ಆರೋಗ್ಯಾಮೃತ' ಕೃತಿ ಆಯ್ಕೆಗೊಂಡಿದೆ. (ರೂ. ೨೫,೦೦೦/- ಮತ್ತು ಪ್ರಶಸ್ತಿ ಪತ್ರ).

೫. **ಆಳ್ವಾಸ್ ನುಡಿಸಿರಿ ಪ್ರಶಸ್ತಿ (೨೦೧೦)** : ಮೂಡಬಿದಿರೆಯಲ್ಲಿ ನಡೆದ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಡಾ. ವೀರಪ್ಪ ಮೊಯಿಲಿ, ಪ್ರೊ. ಜಯಪ್ರಕಾಶ್‌ಗೌಡ, ಡಾ. ಶಿವಮೊಗ್ಗ ಸುಬ್ಬಣ್ಣ, ಡಾ. ಎಂ. ಎಂ. ಕಲಬುರ್ಗಿ, ಶ್ರೀ ಸಂತೋಷ ಕುಮಾರ್ ಗುಲ್ವಾಡಿ, ಡಾ. ಜಿ.ಎಸ್. ಆಮೂರ ಮುಂತಾದವರಿಗೆ ಪ್ರಶಸ್ತಿ ನೀಡಲಾಯಿತು.

೬. **ಕನಕಶ್ರೀ ಪ್ರಶಸ್ತಿ** : ರೂ. ೫ ಲಕ್ಷದ ನಗದು. ಈ ಪ್ರಶಸ್ತಿಗೆ ಪ್ರಪ್ರಥಮವಾಗಿ ಸಾಹಿತಿ ಪ್ರೊ. ಸುಧಾಕರ್ ಆಯ್ಕೆ ಗೊಂಡಿದ್ದಾರೆ. ಇವರು 'ನಡೆದಾಡುವ ಗಾದೆಗಳ ಕೋಶ' ವೆಂದೇ ಖ್ಯಾತರಾಗಿದ್ದಾರೆ. ಇವರ ಜನನ ಮಾಗಡಿ ತಾಲ್ಲೂಕಿನ ಎಣ್ಣೆಗೆರೆ ಗ್ರಾಮದಲ್ಲಿ. ಮುಖ್ಯ ಕೃತಿಗಳು. 'ಕಣ್ಣು ಕಿತ್ತ ಹಸು, ಹೊರಲಾರದ ಹೊರೆ ಮುಂತಾದವು.

೭. **ನಾಡೋಜ ಪ್ರಶಸ್ತಿ-(೨೦೧೦)** : ಸಾಹಿತಿ ಪ್ರೊ. ಬರಗೂರು ರಾಮಚಂದ್ರಪ್ಪ, ಡಾ. ಎಂ. ಎಂ. ಕಲಬುರ್ಗಿ, ಡಾ. ವಿಶ್ವೇಶ್ವರ ಹೆಗ್ಗಡೆ, ಜನಪದ ಕಲಾವಿದ ಪಿ. ಬಿ. ಶ್ರೀನಿವಾಸ್, ಹರಿಜನ ಪದ್ಮಮ್ಮ ಅವರಿಗೆ ಸಂದಿದೆ.

೮. **ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೨೦೧೦)** : ಕನ್ನಡ ವಿಶ್ವವಿದ್ಯಾಲಯ ಹಂಪಿಯ ಭಾಷಾ ನಿಕಾಯದ ಡೀನ್ ಡಾ. ರಹಮತ್ ತರೀಕೆರೆಯವರ 'ಶಕ್ತಿಯಂಚಿನ ದಾರಿ' ಕೃತಿಗೆ ಸಂದಿದೆ.

ಶ್ರದ್ಧಾಂಜಲಿ

೧೫-೧೧-೨೦೧೦ : ಶ್ರೀಮತಿ ಇ. ಪಿ. ಅಲಮೇಲು : ಸಾಹಿತಿ, ವಿದುಷಿ, ಹಾಗೂ ವೀಣಾ ವಿದ್ವಾನ್ ಶ್ರೀಮತಿ ಇ. ಪಿ. ಅಲಮೇಲು ಅವರು ದಿನಾಂಕ ೧೫-೧೧-೧೦ರಂದು ಬೆಂಗಳೂರಿನಲ್ಲಿ ನಿಧನರಾದರು. ಇವರ ಜೀವಿತ ಕಾಲ : ೬-೪-೧೯೩೨ ರಿಂದ ೧೫-೧೧-೨೦೧೦. ಬಹುಮುಖ ಪ್ರತಿಭೆಯ ಶ್ರೀಮತಿಯವರು ಕುಶಲ ಕಲಾವಿದರೂ ಆಗಿದ್ದು, ವಿವಿಧ ರೀತಿಯ ನಾರುಗಳಿಂದ ಅದ್ಭುತ ಕಲಾಕೃತಿಗಳನ್ನು ನಿರ್ಮಿಸಿ ರಾಜ್ಯದ ಹಲವೆಡೆ ಪ್ರದರ್ಶನ ನಡೆಸಿ ಮೆಚ್ಚುಗೆ ಗಳಿಸಿದ್ದರು. 'ಕರ್ನಾಟಕ ಕಲಾಶ್ರೀ', 'ಕೆಂಪೇಗೌಡ', 'ಆರ್ಯಭಟ ಮುಂತಾದ ಹಲವು ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಬನಶಂಕರಿ ಸಾಂಸ್ಕೃತಿಕ ಸಂಘವು ಇವರನ್ನು ರಾಜ್ಯೋತ್ಸವ ಸಂದರ್ಭದಲ್ಲಿ ಪ್ರಶಸ್ತಿ ನೀಡಿ ಪುರಸ್ಕರಿಸಿತ್ತು. ಶ್ರೀಮತಿಯವರು ಹಲವು ವರ್ಷಗಳಿಂದ ಶೇಷ ಮಹಾಗಣಪತಿ ಮಹಿಳಾ ಸಂಘದ ಸ್ಥಾಪಕ ಅಧ್ಯಕ್ಷರಾಗಿದ್ದು ಇದರ ಪ್ರಗತಿಗಾಗಿ ಅಹರ್ನಿಶಿ ಶ್ರಮಿಸಿದ್ದರು.

೪-೧೨-೧೦ ರಂದು ಖ್ಯಾತ ಇತಿಹಾಸಕಾರ, ಲೇಖಕ ಆದ್ಯ ರಾಮಾಚಾರ್ಯ (೮೬) ಅವರು ನಿಧನರಾದರು. ಇವರು [illegible] ಮತ್ತು ಮರಾಠಿ ವಿದ್ವಾಂಸರಾಗಿದ್ದರು. ಚಾರಿತ್ರಿಕ ಕಾದಂಬರಿ (೧೫); ಪೌರಾಣಿಕ ಕಾದಂಬರಿ (೮), ಸಂಶೋಧನಾ ಕೃತಿ (೬), ಜೀವನ ಚರಿತ್ರೆ (೮) ಮುಂತಾಗಿ ಬಹುಮುಖ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ.

೬-೧೨-೧೦ ಡಾ. ಶೈಲಜಾ ಉಡಚಣ, ನಿವೃತ್ತ ಪ್ರಾಂಶುಪಾಲರು ಹಾಗೂ ಖ್ಯಾತ ಕವಯಿತ್ರಿ ಆಗಿದ್ದ ಇವರು, ಅನುಪಮ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ದಾನಚಿಂತಾಮಣಿ ಪ್ರಶಸ್ತಿ ಪುರಸ್ಕೃತರಾಗಿದ್ದರು. ಗುಲ್ಬರ್ಗ ಜಿಲ್ಲಾ ૩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದರು.

೭-೧೨-೧೦ 'ತರಂಗ', 'ನೂತನ' ಪತ್ರಿಕೆಗಳ ಪ್ರಧಾನ ಸಂಪಾದಕರಾಗಿದ್ದ ಖ್ಯಾತ ಪತ್ರಿಕೋದ್ಯಮಿ ಹಾಗೂ ಖ್ಯಾತ ಸಾಹಿತಿಯೂ ಆಗಿದ್ದ ಶ್ರೀ ಸಂತೋಷಕುಮಾರ ಗುಲ್ವಾಡಿ ಇವರು ಬೆಂಗಳೂರಿನಲ್ಲಿ ನಿಧನರಾದರು. ಇತ್ತೀಚಿಗೆ ಇವರು ಮೂಡಬಿದಿರೆಯಲ್ಲಿ ನಡೆದ 'ಆಳ್ವಾಸ್ ನುಡಿಸಿರಿ' ಸಮಾರಂಭದಲ್ಲಿ ಸನ್ಮಾನಿತರಾಗಿದ್ದರು.

# ಬೇಕಾಗಿದ್ದಾರೆ

## ಗ್ರಂಥಾಲಯಾಧಿಕಾರಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಗ್ರಂಥಾಲಯವನ್ನು ಅಚ್ಚುಕಟ್ಟಾಗಿ ನೋಡಿಕೊಳ್ಳಲು ಅನುಭವವುಳ್ಳ ಗ್ರಂಥಾಲಯಾಧಿಕಾರಿಯೊಬ್ಬರು ಬೇಕಾಗಿದ್ದಾರೆ. ನಿವೃತ್ತಿ ಹೊಂದಿರುವ ಹಿರಿಯ ನಾಗರೀಕರಿಗೂ ಆದ್ಯತೆ. ದಿನದ ಕಚೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

## ಕಂಪ್ಯೂಟರ್ ಆಪರೇಟರ್

ಕಂಪ್ಯೂಟರ್‌ನಲ್ಲಿ ಕನ್ನಡ ಮತ್ತು ಇಂಗ್ಲಿಷ್ ಬೆರಳಚ್ಚು ಮಾಡಲು ಅನುಭವವುಳ್ಳ ಕಂಪ್ಯೂಟರ್ ಆಪರೇಟರ್ ಬೇಕಾಗಿದ್ದಾರೆ. ಕಚೇರಿ ವೇಳೆಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸಂಪರ್ಕಿಸಬಹುದು.

ತೆರೆದ-ಅಂಚೆ

ಅಚ್ಚಾದ ಪುಸ್ತಕ



ಶ್ರೀಮತಿ/ಶ್ರೀ.......................................................

..................................................................

..................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ૩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೫೮೭೭

ಮುದ್ರಕರು : ಇಳಾ ಮುದ್ರಣ, ನಂ. ૩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೨೬ ✆ : ೨೬೭೫೭೯೫
'ವಾರ್ತಾಪತ್ರ' ಪ್ರಾಯೋಜಕರು: ಇಳಾ ಮುದ್ರಣ, ಬೆಂಗಳೂರು-೨೬